## ॥ ಈ ಪರಿಯ ಸೊಬಗಾವ ದೇವರಲಿ ॥

ಈ ಪರಿಯ ಸೊಬಗಾವ ದೇವರಲಿ । ನಾ ಕಾಣೆ ॥ ಪ ॥
ಗೋಪೀಜನಪ್ರಿಯ ಗೋಪಾಲಗಲ್ಲದೆ ॥ ಅ ಪ ॥

ದೊರೆಯುತನದಲಿ ನೋಡೆ ಧರಣಿ ದೇವಿಗೆ ರಮಣ ।
ಸಿರಿಯುತನದಲಿ ನೋಡೆ ಶ್ರೀ ಕಾಂತನು ॥
ಹಿರಿಯುತನದಲಿ ನೋಡೆ ಸರಸಿಜೋದ್ಭವನಯ್ಯ ।
ಗುರುವುತನದಲಿ ನೋಡೆ ಜಗದಾದಿ ಗುರುವು ॥ ೧ ॥

ಪಾವನತ್ವದಿ ನೋಡೆ ಅದುರ ಗಂಗಾಜನಕ ।
ದೇವತ್ವದಲಿ ನೋಡೆ ದಿವಿಜರೊಡೆಯ ॥
ಲಾವಣ್ಯದಲಿ ನೋಡೆ ಲೋಕಮೋಹಕನಯ್ಯ ।
ಆವಧೈರ್ಯದಿ ನೋಡೆ ಅಸುರಾಂತಕ ॥ ೨ ॥

ಗಗನದಲಿ ಸಂಚರಿಪ ಗರುಡದೇವನೆ ತುರಗ ।
ಜಗತೀಧರ ಶೇಷಪರ್ಯಂಕಶಯನ ॥
ನಿಗಮಗೋಚರ ಪುರಂದರ ವಿಠಲಗಲ್ಲದೆ ।
ಮಿಗಿಲಾದ ದೈವಗಳಿಗೀ ಭಾಗ್ಯವುಂಟೇ ॥ ೩ ॥